ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತಮೂರನೆಯ ಅಧಿವೇಶನ

ಮಂಗಳವಾರ, ದಿನಾಂಕ: 2ನೇ ಫೆಬ್ರುವರಿ, 2021

ಖರೀದಿ ಏಜೆನ್ಸಿ ಕುರಿತು

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

179(219) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಖರೀದಿ ಏಜೆನ್ಸಿಗಳು (Procurement Agencies) ಎಂದರೇನು; ಅವು ಯಾವುವು ; ಕೃಷಿ ಮಾರಾಟ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಏಜೆನ್ಸಿಗಳು ಯಾವುವು ; (ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಏಜೆನ್ಸಿಗಳು ಕೃಷಿ ಮಾರಾಟ ಇಲಾಖೆಯ ಆವರ್ತ ನಿಧಿ ಹಾಗೂ ಇತರೆ ನಿಧಿಗಳಿಂದ ಹಣ ಪಡೆಯಲು ಇರುವ ಮಾನದಂಡಗಳೇನು ಹಾಗೂ ಇರುವ ಮಾರ್ಗದರ್ಶಿ ಸೂತ್ರಗಳೇನು; (ವಿವರವಾದ ಮಾಹಿತಿ ನೀಡುವುದು)

(ಇ) ಕಳೆದ ಎಷ್ಟು ವರ್ಷಗಳಿಂದ ಈ ಏಜೆನ್ಸಿಗಳು ಕೃಷಿ ಮಾರಾಟ ಇಲಾಖೆಯಿಂದ ಆವರ್ತ ನಿಧಿ ಹಾಗೂ ಇತರೆ ನಿಧಿಗಳಿಂದ ಪಡೆದಿರುವ ಹಣವೆಷ್ಟು ; ಹಾಲಿ ಬಾಕಿ ಇರುವ ಹಣವೆಷ್ಟು ; ಹಾಗೂ ಯಾವ ಉದ್ದೇಶಕ್ಕಾಗಿ ಹಣ ಪಡೆಯಲಾಗಿತ್ತು ; (ವರ್ಷವಾರು ಸಂಪೂರ್ಣ ಮಾಹಿತಿ ನೀಡುವುದು)

(ಈ) ಮಾರುಕಟ್ಟೆ ಸುಧಾರಣಾ ನಿಧಿಯಿಂದ ಕೃಷಿ ಉತ್ಪನ್ನಗಳ ಅಸೇಸಿಂಗ್ ಕಾರ್ಯಗಳಿಗಾಗಿ 2019-20, 2020-21ರಲ್ಲಿ ಯಾವ ಕಾರ್ಯಕ್ರಮಗಳಿಗಾಗಿ ಎಷ್ಟು ಹಣ ಖರ್ಚು ಮಾಡಲಾಗಿದೆ ? (ವಿವರವಾಗಿ ಏಜೆನ್ಸಿವಾರು, ಕಾರ್ಯಕ್ರಮವಾರು ಸಂಪೂರ್ಣ ವಿವರದೊಂದಿಗೆ ಮಾಹಿತಿ ನೀಡುವುದು)